# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 788(885)
ಸದಸ್ಯರ ಹೆಸರು : ಶ್ರೀ ನಿರಾಣಿ ಹಣಮಂತ್ ರುದ್ರಪ್ಪ(ಪದವೀಧರರ ಕ್ಷೇತ್ರ)
ಉತ್ತರಿಸುವ ದಿನಾಂಕ : 20.09.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದ ಅನುದಾನಿತ ಶಾಲಾ/ಕಾಲೇಜುಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಶಿಕ್ಷಕರುಗಳಿಗೆ ಕಾಲ್ಪನಿಕ ವೇತನ ನೀಡುವ ಕುರಿತು ರಚನೆಯಾಗಿದ್ದ ಶ್ರೀ ಬಸವರಾಜ ಹೊರಟ್ಟಿ ರವರ ಅಧ್ಯಕ್ಷತೆಯ ಸಮಿತಿಯು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿದೆಯೇ; ಸಲ್ಲಿಸಿದ್ದಲ್ಲಿ ಯಾವ ವರ್ಷದಲ್ಲಿ ಸಲ್ಲಿಸಲಾಯಿತು; | ಶ್ರೀ ಬಸವರಾಜ ಹೊರಟ್ಟಿ ರವರ ಅಧ್ಯಕ್ಷತೆಯ ಸಮಿತಿಯು ದಿನಾಂಕ:17-03-2015ಮತ್ತು 06.02.2018ರಂದು ಎರಡು ವರದಿಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. |
| ಆ | ಹಾಗಿದ್ದಲ್ಲಿ, ಸದರಿ ವರದಿಯ ಶಿಫಾರಸ್ಸಿನ ಮುಖ್ಯ ಅಂಶಗಳೇನು; (ವಿವರ ನೀಡುವುದು) | ದಿನಾಂಕ:17-03-2015ರಂದು ಸಲ್ಲಿಸಿರುವ ವರದಿಯಲ್ಲಿನ ಪ್ರಮುಖ ಅಂಶಗಳು ಈ ಕೆಳಗಿನಂತಿದೆ :-<br>1. ವಿಧೇಯಕ 2014ನ್ನು ದಿನಾಂಕ:01ನೇ ಜೂನ್ 1995ರ ಬದಲಾಗಿ ದಿನಾಂಕ:12-02-2014ರಿಂದ ಜಾರಿಗೆ ಬರುವಂತೆ ತಿದ್ದುಪಡಿ ಮಾಡಲು;<br>2. ಈಗ ರದ್ದಾಗಿರುವ ಆದೇಶದನ್ವಯ ಸೇವಾ ಸೌಲಭ್ಯಗಳನ್ನು ಪಾವತಿ ಮಾಡಲಾದ ಯಾವುದೇ ಮೊತ್ತವನ್ನು ವಸೂಲು ಮಾಡದಿರಲು;<br>3. ನಿವೃತ್ತಿ ಹೊಂದಿರುವ ಶಿಕ್ಷಕರಿಗೆ ಸಂಬಂಧಿಸಿದಂತೆ ಪಿಂಚಣಿ ನಿಗಧಿ ಮಾಡುವಾಗ ಅವರು ಅನುದಾನರಹಿತ ಅವಧಿಯ ಸೇವೆಯನ್ನು ಹೊರತುಪಡಿಸಿ ಪಿಂಚಣಿಯನ್ನು ನಿಗಧಿ ಪಡಿಸುತ್ತಿದ್ದು, ಮತ್ತು ಈಗಾಗಲೇ ಅನುದಾನರಹಿತ ಅವಧಿಯನ್ನು ಪರಿಗಣನೆಗೆ ತೆಗೆದುಕೊಂಡು ಪಿಂಚಣಿಗೆ ನಿಗಧಿಪಡಿಸಿರುವ ಸೌಲಭ್ಯವನ್ನು ಹಿಂಪಡೆದು ಕಡಿತಗೊಳಿಸದಂತೆ ಆದೇಶ ಹೊರಡಿಸುವಂತೆ;<br>4. ಕಾಲ್ಪನಿಕ ವೇತನ ಸೌಲಭ್ಯದಿಂದ ಸುಮಾರು 25 ಸಾವಿರ ನೌಕರರು ವಂಚಿತರಾಗಲಿದ್ದು, ವಾರ್ಷಿಕವಾಗಿ ರೂ. 351 ಕೋಟಿಗಳು ಕಾಲ್ಪನಿಕ ವೇತನಕ್ಕೆ ತಗುಲಲಿದ್ದು, ಸಮಸ್ಯೆಗೆ ಅಂತಿಮ ಪರಿಹಾರ ನೀಡಲು ವಿಧೇಯಕಕ್ಕೆ ಆಡಳಿತಾತ್ಮಕ ಆದೇಶ ಹೊರಡಿಸುವುದು.<br><br>ದಿನಾಂಕ:06/02/2018ರಂದು ಸಲ್ಲಿಸಿರುವ ವರದಿಯಲ್ಲಿನ ಪ್ರಮುಖ ಅಂಶಗಳು ಈ ಕೆಳಗಿನಂತಿದೆ :-<br><br>A. ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅನುದಾನಿತ ಸಿಬ್ಬಂದಿಯವರಿಗೆ ಕಾಲ್ಪನಿಕ ವೇತನ ನಿಗದಿ ಮಾಡಿ, ವೇತನವನ್ನು |

| | | |
|---|---|---|
| | | ಪುನರ್ ನಿಗದಿಪಡಿಸಿ ವೇತನ ಸೌಲಭ್ಯವನ್ನು ಹಾಗೂ ಪಿಂಚಣಿ, ಗ್ರಾಚ್ಯುಟಿ ಸೌಲಭ್ಯವನ್ನು ನೀಡುವುದು;<br>B. ಅನುದಾನರಹಿತ ಅವಧಿಯನ್ನು ಪರಿಗಣಿಸಿ ಪದೋನ್ನತಿ, Time Bound ಹಾಗೂ ಪ್ಲೇಸ್ ಮೆಂಟ್ ಸೌಲಭ್ಯವನ್ನು ನೀಡುವುದು.<br>C. ಕಾಲ್ಪನಿಕ ವೇತನ ನಿಗಧಿಪಡಿಸಿದ ನಂತರ ಯಾವುದೇ ನೌಕರರು ಹಿಂದಿನ ಯಾವುದೇ ಬಾಕಿಯನ್ನು ಕೇಳುವಂತಿಲ್ಲ;<br>D. ನ್ಯಾಯಾಲಯದಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ದಾವೆ ಹೂಡಿರುವವರು ತಮ್ಮ ಪ್ರಕರಣಕ್ಕೆ ಸಂಬಂಧಿಸಿದಂತೆ ದಾವೆ ಹೂಡಿರುವವರು ತಮ್ಮ ಪ್ರಕರಣಗಳನ್ನು ವಾಪಸ್ ಪಡೆದಲ್ಲಿ, ಈ ಸೌಲಭ್ಯಕ್ಕೆ ಅರ್ಹರಿರುತ್ತಾರೆಂಬ ಅಂಶವನ್ನು ಇಲಾಖೆಯ ಆದೇಶದಲ್ಲಿ ಸ್ಪಷ್ಟಪಡಿಸುವುದು.<br>E. ಈಗಾಗಲೇ ಈ ಸೌಲಭ್ಯವನ್ನು ಪಡೆಯುತ್ತಿರುವವರಿಗೆ ಯಥಾವತ್ತಾಗಿ ಮುಂದುವರೆಸುವುದು ಹಾಗೂ ಈಗಾಗಲೇ ಆರ್ಥಿಕ ಸೌಲಭ್ಯವನ್ನು ಪಡೆದು ನಿವೃತ್ತಿ ಆಗಿರುವ/ಆಗಲಿರುವ ನೌಕರರಿಗೆ ಯಾವುದೇ ರೀತಿಯ ಆರ್ಥಿಕ ಕಡಿತವನ್ನು ಮಾಡಬಾರದು. ನಿವೃತ್ತಿ ವೇತನ ನಿಗದಿಪಡಿಸುವಾಗ ಅನುದಾನರಹಿತ ಅವಧಿಯನ್ನು ಕಡಿತಗೊಳಿಸಿ ಪುನರ್‌ನಿಗದಿ ಪಡಿಸಬಾರದು;<br>F. ನಿವೃತ್ತರಾಗುತ್ತಿರುವವರಿಗೆ ನಿವೃತ್ತಿ ಉಪದಾನವನ್ನು ಕಡಿತಗೊಳಿಸದಂತೆ ಸರ್ಕಾರಿ ಆದೇಶ ಹೊರಡಿಸುವುದು; |
| ಇ | ಸದರಿ ವರದಿಯ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸಲು ಸರ್ಕಾರ ಕ್ರಮ ಕೈಗೊಂಡಿದೆಯೇ; | ಅನುದಾನ ಸಂಹಿತೆಯ ಪ್ರಕಾರ ಅನುದಾನಕ್ಕೊಳಪಟ್ಟ ಸಿಬ್ಬಂದಿಗೆ ಅನುದಾನ ದೊರೆತ ದಿನಾಂಕದಿಂದ ಮಾತ್ರ ಕನಿಷ್ಟ ವೇತನ ನಿಗದಿ ಮಾಡಬೇಕು ಹಾಗೂ ಹಿಂದಿನ ಸೇವಾವಧಿಯನ್ನು ಯಾವುದೇ ಸೇವಾ ಸೌಲಭ್ಯಕ್ಕೆ ಪರಿಗಣಿಸುವಂತಿಲ್ಲ. ಈ ಸಂಬಂಧ ಸರ್ಕಾರವು ದಿನಾಂಕ:01.06.1995ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ಖಾಸಗಿ ಅನುದಾನಿತ ಶೈಕ್ಷಣಿಕ ಸಂಸ್ಥೆಗಳ ಸಿಬ್ಬಂಧಿಗಳ (ವೇತನ, ನಿವೃತ್ತಿ ವೇತನ ಮತ್ತು ಇತರೆ ಸೌಲಭ್ಯಗಳ ನಿಯಂತ್ರಣ) ಅಧಿನಿಯಮ 2014ನ್ನು ಜಾರಿಗೆ ತರಲಾಗಿದೆ.<br><br>ಈ ಅಧಿನಿಯಮವನ್ನು ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂಧಿಗಳು ಪ್ರಶ್ನಿಸಿರುವ ರಿಟ್ ಅರ್ಜಿಗಳಾದ |
| ಈ | ಇಲ್ಲವಾದಲ್ಲಿ, ವಿಳಂಬವಾಗುತ್ತಿರುವುದಕ್ಕೆ ಕಾರಣಗಳೇನು; ಹಾಗೂ ಯಾವ ಕಾಲಮಿತಿಯಲ್ಲಿ ಸದರಿ ವರದಿಯ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸಲಾಗುವುದು?. | |

| | | |
|---|---|---|
| | | 21216/2014 ಮತ್ತು 14307/2014 ಮತ್ತು ತತ್ಸಬಂಧದ ಪ್ರಕರಣಗಳಲ್ಲಿ ಮಾನ್ಯ ಉಚ್ಚನ್ಯಾಯಾಲಯವು ದಿನಾಂಕ:10.07.2015ರಂದು ನೀಡಿದ ತೀರ್ಪಿನಲ್ಲಿ ಸದರಿ ಅಧಿನಿಯಮವನ್ನು "struck down" ಮಾಡಿರುತ್ತದೆ.<br>ಮೇಲಿನ ಮಾನ್ಯ ನ್ಯಾಯಾಲಯದ ತೀರ್ಪನ್ನು ಪ್ರಶ್ನಿಸಿ ಸರ್ಕಾರವು ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ರಿಟ್ ಅಪೀಲು ಸಂಖ್ಯೆ:2476/2015 ಮತ್ತು 2467/2015ನ್ನು ದಾಖಲಿಸಿದೆ. ಮೇಲಿನ ರಿಟ್ ಅರ್ಜಿಗಳಲ್ಲಿ ನೀಡಿದ ತೀರ್ಪಿಗೆ ದಿನಾಂಕ:27.11.2015ರಂದು ತಡೆಯಾಜ್ಞೆ ನೀಡಿರುತ್ತದೆ. ಸದರಿ ತಡೆಯಾಜ್ಞೆಯು ಪ್ರಸ್ತುತ ಜಾರಿಯಲ್ಲಿದ್ದು, ಪ್ರಕರಣವು ಮಾನ್ಯ ನ್ಯಾಯಾಲಯದಲ್ಲಿ ಬಾಕಿಯಿರುತ್ತದೆ.<br>ಮಾನ್ಯ ಶ್ರೀ ಬಸವರಾಜ ಹೊರಟ್ಟಿರವರ ಅಧ್ಯಕ್ಷತೆಯ ಸಮಿತಿಯ ವರದಿ ಮತ್ತು ಇಲಾಖೆಗಳಲ್ಲಿನ ವಾಸ್ತವ ಅಂಕಿಅಂಶಗಳನ್ನು ಪರಿಶೀಲಿಸಲಾಗಿ, ಹಾಲಿ ನೀಡಲಾಗುತ್ತಿರುವ ವೇತನಕ್ಕೆ ಅನುದಾನ ರಹಿತ ಅವಧಿಯನ್ನು ಪರಿಗಣನೆಗೆ ತೆಗೆದುಕೊಂಡು ವೇತನವನ್ನು ಪರಿಷ್ಕರಿಸಿದಲ್ಲಿ ಹೆಚ್ಚುವರಿಯಾಗಿ ವಾರ್ಷಿಕವಾಗಿ ರೂ.359.87ಕೋಟಿಗಳ ಅನುದಾನವು ಬೇಕಾಗುತ್ತದೆ. ಆದರೆ, ಅವರಿಗೆ ಹಿಂಬಾಕಿ ಮತ್ತು ಪಿಂಚಣಿಗಾಗಿ ತಗಲುವ ಅಂದಾಜು ವೆಚ್ಚವು ಪ್ರಸ್ತಾಪಿತ ರೂ.359.87 ಕೋಟಿಗಳಲ್ಲಿ ಒಳಗೊಂಡಿರುವುದಿಲ್ಲ. ಸದರಿ ಮೊತ್ತವಾದ ರೂ.359.87/- ಕೋಟಿ ಒಂದು ವರ್ಷಕ್ಕೆ ಬೇಕಾದ ಹೆಚ್ಚುವರಿ ಮೊತ್ತವಾಗುತ್ತದೆ. ಈ ಅನುಕೂಲ ಪಡೆಯುವ ಸಿಬ್ಬಂದಿ ಪೂರ್ಣ ಸೇವಾವಧಿಯಲ್ಲಿ ಪಡೆಯುವ ಮೊತ್ತದ ಒಟ್ಟು ಮೊತ್ತದ ಲೆಕ್ಕಾಚಾರ ಇಲಾಖೆಗಳಲ್ಲಿ ಇನ್ನು ಆಗಿರುವುದಿಲ್ಲ. ಹಾಗೆಯೇ ನಿವೃತ್ತಿ ಸೌಲಭ್ಯಗಳ ಒಟ್ಟಾರೆ ಆರ್ಥಿಕ ಹೊರೆ ರೂ.1637.61ಕೋಟಿ ಗಳಾಗಿದ್ದು, ಇದರ ವರ್ಷವಾರು ಆರ್ಥಿಕ ಹೊರೆ ಸಹ ಲೆಕ್ಕಹಾಕಿರುವುದಿಲ್ಲ. ಈ ಎರಡೂ ಮೊತ್ತಗಳ ಮಾಹಿತಿಯನ್ನು ಸಂಗ್ರಹಿಸಲಾಗುತ್ತಿದೆ. ಅನುದಾನರಹಿತ ಸೇವಾವಧಿಯ ಸಂಬಂಧ ನೀಡಬೇಕಾದ ವೇತನ ಬಾಕಿ ಮೊತ್ತ ರೂ.3083.54 ಕೋಟಿಗಳೆಂದು ಅಂದಾಜಿಸಲಾಗಿದೆ.<br>ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ಕಾಲ್ಪನಿಕ ವೇತನ ಬಡ್ತಿಯನ್ನು ಜಾರಿಗೊಳಿಸುವ ಬಗ್ಗೆ ಸರ್ಕಾರಕ್ಕೆ ಯಾವುದೇ ನಿಲುವನ್ನು ತಳೆಯಲು ಸಾಧ್ಯವಾಗಿರುವುದಿಲ್ಲ. |

ಸಂಖ್ಯೆ:ಇಪಿ 325 ಎಸ್ಇಎಸ್ 2021

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು